# ವಚನ ಸಾಹಿತ್ಯ : ಬಹುಮುಖಿ ಅಧ್ಯಯನದ ನೆಲೆಗಳು

## ರಾಷ್ಟ್ರಮಟ್ಟದ ವಿಚಾರ ಸಂಕಿರಣದಲ್ಲಿ ಮಂಡನೆಯಾದ ಪ್ರಬಂಧಗಳು









## ಸಂಪುಟ - ೧









ಗೌರವ ಸಂಪಾದಕರು :
ಪ್ರೊ. ಶಿವಣ್ಣಗೌಡ,
ಪ್ರಾಂಶುಪಾಲರು

ಸಂಪಾದಕರು :
ರವಿ ಎನ್. ಸಿ.,
ಮುಖ್ಯಸ್ಥರು, ಕನ್ನಡ ವಿಭಾಗ

ಆಯೋಜಕರು
ಕನ್ನಡ ವಿಭಾಗ
ಸರ್ಕಾರಿ ಗೃಹವಿಜ್ಞಾನ ಕಾಲೇಜು
ಹಾಸನ - 573202

# ವಚನಕಾರರ ಧಾರ್ಮಿಕ ಮತ್ತು ಸಾಮಾಜಿಕ ಪರಿಕಲ್ಪನೆ

**ಅಶೋಕ. ಎಚ್. ಕೆ* ಮತ್ತು ಸುಂದ್ರೇಶ್. ಕೆ. ಎಸ್****

ವಿಶ್ವ ಸಾಹಿತ್ಯ ಇತಿಹಾಸದಲ್ಲಿ ವಚನ ಸಾಹಿತ್ಯಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. ಈ ವಚನ ಸಾಹಿತ್ಯವೂ ಕನ್ನಡ ನಾಡು–ನುಡಿಯಲ್ಲಿ ಮೈದಳೆಯಿತು ಎಂಬುದೇ ಸೊಗಸು ಮತ್ತು ಸೋಜಿಗದ ಸಂಗತಿ. ಯಾವ ಕಾಲಘಟ್ಟದಲ್ಲಿ ಸೂಕ್ಷ್ಮ ಸಂವೇದನೆವುಳ್ಳವರೂ, ಆಲೋಚನಾಪರರೂ ಹಾಗೂ ಮಾನವೀಯತೆಯ ಅಂತಃಕರಣವುಳ್ಳವರೂ ತಮ್ಮ ಸುತ್ತ–ಮುತ್ತಲ ಸಾಮಾಜಿಕ ಪರಿಸ್ಥಿತಿಯನ್ನು ರೂಢಿಗತವಾದ ವ್ಯವಸ್ಥೆ ಮತ್ತು ಪರಂಪರಾಗತವಾದ ಸಂಪ್ರದಾಯಗಳನ್ನು ಪ್ರಶ್ನಿಸುತ್ತಾ ಪ್ರತಿಭಟಿಸಲು ತೊಡಗುತ್ತಾರೊ, ಆ ಸಂಧರ್ಭದಲ್ಲಿ ಹೊಸತನದ ನಿರ್ಮಿತಿಯು ಮೈದೋರುತ್ತದೆ. ಇದರ ಪರಿಣಾಮವೇ ಒಂದು ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ವಿಚಾರಕ್ರಾಂತಿ. ವಚನಕಾರರು ಮೂಲತಃ ಅತ್ಯಂತ ನಿಷ್ಠುರ ಧಾರ್ಮಿಕ ಮತ್ತು ಸಾಮಾಜಿಕ ವಿಮರ್ಶಕರು. ರೂಢಿಗತ ಪರಂಪರೆ, ದೇವರು–ಧರ್ಮ, ತಮ್ಮ ಸುತ್ತಲಿನ ಸಾಮಾಜಿಕ ಪರಿಸರವನ್ನು ಅಷ್ಟೇ ಏಕೆ ತಮ್ಮನ್ನೇ ಕುರಿತು ವಸ್ತುನಿಷ್ಠ ಹಾಗೂ ವಾಸ್ತವಿಕವಾಗಿ ವಿಮರ್ಶೆ ಮಾಡಿಕೊಂಡವರು. ಈ ವಿಮರ್ಶೆಯು ವೈಯಕ್ತಿಕ ಹಾಗೂ ಸಾಮೂಹಿಕವಾಗಿ ಕೂಡ ನಡೆದಂತೆ ಕಂಡುಬರುತ್ತದೆ.

ಹೀಗೆ ಸಾಮಾಜಿಕ ವಿಮರ್ಶೆಯ ನಡೆ–ನುಡಿಯಲ್ಲಿ ತೊಡಗಿಕೊಂಡವರು ಪ್ರಬುದ್ಧತೆ ಇದ್ದವರೇ ಹೊರತು ಪಂಡಿತರಲ್ಲ. ವಿಚಾರವಂತರೆ ವಿನಃ ಎಲ್ಲರೂ ಮೇಲ್ಜಾತಿಯಲ್ಲಿ ಜನಿಸಿದವರಲ್ಲ. ವಾಸ್ತವಿಕೆಯ ಅರಿವಿದ್ದವರೇ ಹೊರತು ಭ್ರಮೆಯಲ್ಲಿ ಬದುಕುತ್ತಿದ್ದವರಲ್ಲ. ತಮ್ಮ ವೈಚಾರಿಕ ನಿಲುವುಗಳಿಂದ ಉನ್ನತವಾದ ಕ್ರಾಂತಿ ಅಥವಾ ಬದಲಾವಣೆಯನ್ನು ಮಾಡುತ್ತಿದ್ದೇವೆ ಎಂಬ ಅಹಂಕಾರ ಪೂರ್ಣ ನಡವಳಿಕೆಯುಳ್ಳವರಲ್ಲ. ಜಾತಿ, ಮದ, ಮತ್ಸರ & ಲಿಂಗ ಭೇದ–ಭಾವ ಎನ್ನದೆ ಸ್ವಾತಂತ್ರ್ಯ ಮತ್ತು ಸಮಾನತೆಯ ನೆಲೆಯಲ್ಲಿ ಸಾಗಿದವರು.

ವಚನಕಾರರಿಗೆ ಮಹತ್ವ ಸಂದಿದ್ದೇ ಅವರ ವೈಚಾರಿಕ ನಿಲುವಿಗಾಗಿ. ರೂಢಿಗತವಾಗಿದ್ದ ವೇದ–ಶಾಸ್ತ್ರ, ದೇವರು–ಧರ್ಮ, ಆಚಾರ–ವಿಚಾರಗಳನ್ನು ವಾಸ್ತವಿಕ ನೆಲೆಯಿಂದ ವಿಮರ್ಶಿಸಿದಾಗ, ಕೇವಲ ತಿರಸ್ಕಾರ ಅಥವಾ ನಿರಾಕರಣೆಯ ಮನೋಭಾವದಿಂದ ಯಾರೂ ವಿಚಾರವಾದಿಗಳು ಎನ್ನಿಸಿಕೊಳ್ಳಲು ಸಾಧ್ಯವಿಲ್ಲ. ಯಾವುದನ್ನೇ ಆಗಲಿ ವಿಮರ್ಶಿಸುವಾಗ ಅಥವಾ ನಿರಾಕರಿಸುವಾಗ ಸುತ್ತ–ಮುತ್ತಲ ಪರಿಸರದಲ್ಲಿ ಯಾವುದು ತಮ್ಮ–ತಮ್ಮ ಸ್ವ ಅನುಭವಕ್ಕೆ ಬರುತ್ತದೆಯೋ ಅದನ್ನು ನಿದರ್ಶನದೊಂದಿಗೆ ವಿಚಾರಪೂರ್ವಕವಾಗಿ ನಿರಾಕರಿಸಿದರು.

ವೇದಶಾಸ್ತ್ರ ಪುರಾಣಗಳೆಂಬ
ಕೊಟ್ಟಣವ ಕುಟ್ಟುತ್ತ ನುಚ್ಚು ತೌಡುಕಾಣಿರೋ

ಎಂದು ಅಕ್ಕಮಹಾದೇವಿ ವೇದ–ಶಾಸ್ತ್ರಗಳ ಏಕಮುಖಿ ನಿರರ್ಥಕತೆಯನ್ನುಈ ಹಿನ್ನಲೆಯಲ್ಲಿಯೇ ಪ್ರಸ್ತಾಪಿಸಿದಳು.

ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ,
ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗಕೊಯ್ಯುವೆ ನೋಡಯ್ಯ.

ಎಂದು ಬಸವಣ್ಣನವರು ಸವಾಲು ಹಾಕಿದರು. ವೇದವನೋದಿದರೇನು? ಶಾಸ್ತ್ರವ ಕೇಳಿದರೇನು? ಪ್ರಯೋಜನ ಎಂಬುದೇ ವಚನಕಾರರ ಬಹುಮುಖ್ಯ ಧೋರಣೆಯಾಗಿತ್ತು. ಹೀಗೆ ವೇದ–ಶಾಸ್ತ್ರಗಳ ಬಗ್ಗೆ ವಚನಕಾರರು ಕಟು ಧೋರಣೆಯನ್ನು ತಾಳಲು ಹಿಂದೂ ಧರ್ಮದಲ್ಲಿನ ವರ್ಣ–ವರ್ಗ, ಶ್ರೇಷ್ಠ–ಕನಿಷ್ಠರೆಂಬ ತಾರತಮ್ಯ ಎದ್ದು ಕಾಣಿಸಿರಬೇಕು. ಯಜ್ಞ–ಯಾಗಾದಿ, ಆಚಾರ–ವಿಚಾರಗಳಿಂದ ಮೇಲು–ಕೀಳು ಎಂದು ಉದ್ಘೋಷಿಸುವುದು ವಚನಕಾರರಿಗೆ ಅಸಹ್ಯ ಹುಟ್ಟಿಸಿದೆ. ಆಧ್ಯಾತ್ಮಿಕ ಅನುಭವ ಎನ್ನುವುದು ವ್ಯಕ್ತಿಯ ವೈಯಕ್ತಿಕ ಸಾಧನೆ, ಸಂಸ್ಕಾರ, ಶ್ರದ್ಧೆ, ನಿಷ್ಠೆಗಳಿಂದ ಲಭಿಸಬಹುದೇ ಹೊರತು ಕೇವಲ ಬಾಯಿಂದ ವೇದ–ಶಾಸ್ತ್ರ ಆಗಮಗಳನ್ನು ಪಠಿಸುವುದರಿಂದ ಅಲ್ಲ. ಅನುಭಾವ ಅಥವಾ ಆಧ್ಯಾತ್ಮಿಕತೆ ಎನ್ನುವುದು “ಅಂತರಂಗದ ರತ್ನ ಕಾಣಿರೋ” ಎಂದು ವಚನಕಾರರು ಹೇಳಿರುವುದು ಇದೇ ಅರ್ಥದಲ್ಲಿ.

“ಆಧ್ಯಾತ್ಮಿಕತೆ” ಎನ್ನುವ ಪರಿಕಲ್ಪನೆಯನ್ನು ವಚನಕಾರರು ನಿರ್ವಚಿಸಿಕೊಂಡ ಬಗೆಯೇ ವಿಭಿನ್ನವಾಗಿದೆ. ಆಧ್ಯಾತ್ಮ, ಧ್ಯಾನ, ಭಕ್ತಿ, ತಪಸ್ಸು, ಸನ್ಯಾಸ, ಮಠ, ದೇವಾಲಯ ಮುಂತಾದ ಪರಂಪರಾಗತವಾದ ಭಕ್ತಿ ಮೂಲ ಸಂಸ್ಕೃತಿಯನ್ನು ನಿರ್ವಚಿಸುವಾಗ ಇಡೀ ವಚನಕಾರರು ವಿಮರ್ಶಿಸಿ, ಇವುಗಳ ಅರ್ಥ ಚಿಂತನೆಯನ್ನು ಪರಿಷ್ಕಾರ ಮಾಡಿ ಪುನರ್ ವ್ಯಾಖ್ಯಾನಿಸಿದರು. ಸನ್ಯಾಸ ಎಂದರೇ ಸಂಸಾರದಿಂದ ವಿಮುಖವಾದ ಕೇವಲ ‘ದಾಸ’ ಎಂಬ ಚಿಂತನೆಯ ಬದಲಾಗಿ ಚಿತ್ತ ಸಮಾಧಾನದ ಸರ್ವಸಮಾನತೆಯ ಸಮಾಜಮುಖಿ ಚಿಂತನೆಯ ವಿಧಾನವಾಗಿ ಅರ್ಥೈಸಿದರು. ಇದಕ್ಕೇ “ಮಠದೊಳಗೆ ಬೆಕ್ಕು ಇಲಿಯ ನೋಡಿ ಪುಟ ನೆಗೆದಂತಾಯಿತು” ಎಂದು ದೇವರ ದಾಸಿಮಯ್ಯ ವ್ಯಾಖ್ಯಾನಿಸಿದ್ದು.

* ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಕಲೇಶಪುರ – 573134, ಹಾಸನ ಜಿಲ್ಲೆ
** ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಅರೇಹಳ್ಳಿ, ಬೇಲೂರು ತಾಲೂಕು ಹಾಸನ

ಮಠವೇಕೋ ಪರ್ವತವೇಕೋ
ಜನವೇಕೋ ನಿರ್ಜನವೇಕೋ
ಚಿತ್ತ ಸಮಾಧಾನ ಉಳ್ಳ ಶರಣಂಗೆ?

ಎನ್ನುವ ವೈಚಾರಿಕತೆಯ ಪ್ರಶ್ನೆಯು ತಪಸ್ಸು ಮತ್ತು ಸನ್ಯಾಸ ಎಂದರೇ ಕೇವಲ ದೇಹದಂಡನೆ ಮಾಡುವುದಲ್ಲ. ಅದು ಮನಸ್ಸಿನ ದಂಡನೆಯಾಗಬೇಕು ಎನ್ನುವ ಅರ್ಥದಲ್ಲಿ "ಹುತ್ತವ ಬಡಿದೆಡೆ ಹಾವು ಸಾಯಬಲ್ಲುದೆ ಅಯ್ಯ?" ಎಂದು ವಚನಕಾರರು ಪ್ರಶ್ನಿಸುತ್ತಾರೆ. ಆಧ್ಯಾತ್ಮಿಕತೆಯ ಸಾಧನೆಯ ಹಾದಿಯಲ್ಲಿ ಸಾಗಿ ತಪಸ್ಸು ಮತ್ತು ಸನ್ಯಾಸ ಮಾಡುವುದು ಎಂದರೆ, ಸಂಸಾರವನ್ನಾಗಲಿ, ಮನೆಯನ್ನಾಗಲಿ ಬಿಡಬೇಕಾಗಿರುವುದಲ್ಲ. ಬದಲಾಗಿ "ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎನ್ನುತ್ತಾರೆ. ವಚನಕಾರರ ದೃಷ್ಟಿಯಲ್ಲಿ ಹುತ್ತ ಮತ್ತು ಹಾವಿನ ಪರಿಕಲ್ಪನೆಯು ದೇಹ-ಮನಸ್ಸಿನ ಪರಿಕಲ್ಪನೆಯಾಗಿದೆ. ಇನ್ನೂ ಲಿಂಗ ಸಮಾನತೆಯ ದೃಷ್ಟಿಯಿಂದ ವಚನಕಾರರು ತಪಸ್ಸು ಅಥವಾ ಸನ್ಯಾಸ ಮಾಡುವುದು ಕೇವಲ ಪುರುಷರು ಮಾತ್ರವಲ್ಲ ಸ್ತ್ರೀಯರಿಗೂ ತಪಸ್ಸು ಮಾಡುವುದಕ್ಕೆ ಸ್ವಾತಂತ್ರ್ಯವಿದೆ. ಸ್ತ್ರೀಯೂ ಕೂಡ ಮೋಕ್ಷಕ್ಕೆ ಅರ್ಹಳು ಎಂದು ನಿರೂಪಿಸಿದರು. ಗಂಡು-ಹೆಣ್ಣಿಗೂ ಇರುವ ವ್ಯತ್ಯಾಸ ಯಾವುದು ಎಂದು ಹೇಳುತ್ತಾ,

ಮೊಲೆ ಮೂಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು ಗಂಡೂ ಅಲ್ಲ
ಹೆಣ್ಣೂ ಅಲ್ಲ ಕಾಣಾ ರಾಮನಾಥ

ಎಂದು ತಾರ್ಕಿಕ ಮತ್ತು ಪಕ್ಷಪಾತ ರಹಿತವಾಗಿ ವೈಚಾರಿಕ ಹಿನ್ನೆಲೆಯಿಂದ ವ್ಯಾಖ್ಯಾನಿಸಿದರು. ಮೋಹ, ಮಾಯೆ, ವಿಧಿ ಮುಂತಾದ ಪರಾಂಪರಾಗತ ಚಿಂತನೆಗಳ ವ್ಯಾಖ್ಯಾನವನ್ನು ಚಿಂತಿಸುತ್ತಾ.

ಹೆಣ್ಣು ಮಾಯೆಯೆಂಬರು, ಹೊನ್ನು ಮಾಯೆ ಎಂಬರು,
ಮಣ್ಣು ಮಾಯೆ ಎಂಬರು;
ಹೆಣ್ಣು ಮಾಯೆ ಅಲ್ಲ, ಹೊನ್ನು ಮಾಯೆ ಅಲ್ಲ,
ಮಣ್ಣು ಮಾಯೆ ಅಲ್ಲ,
ಮನದ ಮುಂದಣ ಆಸೆಯ ಮಾಯೆ ಕಣಾ ಗುಹೇಶ್ವರ!

ಎನ್ನುತ್ತಾರೆ. ಮಾಯೆ ಎಂಬ ನುಡಿ ಬಂದಾಗೆಲ್ಲಾ ಹಿಂದೂ, ಜೈನ ಮುಂತಾದ ಧರ್ಮಗಳ ಪರ್ಯಾಯ ವ್ಯಾಖ್ಯಾನ 'ಹೆಣ್ಣು' ಎಂದೇ ಆಗಿದೆ. ಹೆಣ್ಣು ಮಾಯೆ ಆಗುವುದಾದರೆ ಗಂಡು ಕೂಡ ಏಕೆ ಆಗಬಾರದು? ಎಂದು ಪ್ರಶ್ನಿಸಿದವರು ವಚನಕಾರರು. ಇದಕ್ಕೆ ಅಕ್ಕಮಹಾದೇವಿಯೂ

ಗಂಡಿಂಗೆ ಹೆಣ್ಣಾಗಿ ಕಾಡಿತ್ತು ಮಾಯೆ
ಹೆಣ್ಣಿಂಗೆ ಗಂಡಾಗಿ ಕಾಡಿತ್ತು ಮಾಯೆ

ಎಂದು ಪರ್ಯಾಯ ಪ್ರತಿಭಟನೆಯನ್ನು ದಾಖಲಿಸುತ್ತಾಳೆ. ನಿಜವಾಗಿಯೂ ಕ್ರಿ.ಪೂ.ದಿಂದ 12ನೇ ಶತಮಾನದವರೆಗೆ ಹೆಣ್ಣಿಗಾಗಿರುವ ಮೋಸ, ಅನ್ಯಾಯ, ವಂಚನೆ ಮತ್ತು ಸ್ಥಾನಮಾನ ವಿಮುಖ ಸ್ಥಿತಿಗೆ ಒಟ್ಟು ನ್ಯಾಯ ದೊರಕಿಸಿಕೊಟ್ಟಿದ್ದೇ ವಚನಕಾರರು. ಪುರುಷನೊಂದಿಗೆ ಸರಿಸಮಾನವಾಗಿ ಕೂರುವ, ಚಿಂತಿಸುವ, ಮಾತನಾಡುವ, ವಿಚಾರ ವಿನಿಮಯ ಮಾಡಿಕೊಳ್ಳುವ ದೇವರನ್ನು ಪೂಜಿಸುವ ಎಲ್ಲಾ ಅಧಿಕಾರ ನೀಡಿದ್ದು ಶಿವಶರಣರು ಮಾತ್ರ. ಇದಕ್ಕೆ ಅಕ್ಕಮಹಾದೇವಿಯೇ ಉತ್ತಮ ಉದಾಹರಣೆ.

ದೇವರು ಮತ್ತು ದೇವಸ್ಥಾನಗಳನ್ನು ಕುರಿತು ವಚನಕಾರರ ನಿಲುವು ಅತ್ಯಂತ ವಿಚಾರಾರ್ಹವೂ ವೈಚಾರಿಕವೂ ಆಗಿದೆ. ದೇವರು-ಧರ್ಮ, ಪಾಪ-ಪುಣ್ಯ ವಿವೇಚನೆಯು ಕೇವಲ ಯಾಂತ್ರಿಕ ಪರಿಕಲ್ಪನೆಗಳಾಗಿ ವಚನಕಾರರು ನಿರ್ವಚಿಸಲಿಲ್ಲ. ದೇವರು ಮತ್ತು ಧರ್ಮದ ಪರಂಪರಾಗತ ವಿವೇಚನೆಯೇ ಜಾತಿಯತೆ, ಸ್ಪೃಶ್ಯ-ಅಸ್ಪೃಶ್ಯತೆಗೆ ಕಾರಣವಾಗಿದೆ ಎಂಬ ನಿಲುವು ವಚನಕಾರರದು. ಶೋಷಣೆ ಮತು ಸುಲಿಗೆ ಹುಟ್ಟಿದ್ದೇ ದೇವರು-ದೇವಸ್ಥಾನದ ಮೂಲಗಳಿಂದ. ಇದಕ್ಕಾಗಿ ವಚನಕಾರರು ದೇವರು ಮತ್ತು ದೇವಸ್ಥಾನದ ಪರಿಕಲ್ಪನೆಯನ್ನೇ ಬದಲಾಯಿಸಿದರು. ವಚನಕಾರರ ದೃಷ್ಟಿಯಲ್ಲಿ ದೇವರು ಎಂದರೆ ವರ್ಣರಂಜಿತವಾದ ಮತ್ತು ಬೆಲೆ ಬಾಳುವ ಲೋಹದ ಮೂರ್ತಿ ಅಲ್ಲ. ಇದಕ್ಕಾಗಿಯೇ.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆನು ಬಡವನಯ್ಯಾ
ಎನ್ನ ಕಾಲೇ ಕಂಭ, ದೇಹವೇ ದೇಗುಲ
ಶಿರವೇ ಹೊನ್ನ ಕಳಶವಯ್ಯಾ

ಎಂದು ಬಸವಣ್ಣ ದೇವರು-ದೇವಾಲಯದ ಪುನರ್ ವ್ಯಾಖ್ಯಾನ ಮಾಡಿದ. ವಚನಕಾರರ ದೃಷ್ಟಿಯಲ್ಲಿ ದೇವರು-ದೇವಾಲಯ ಎನ್ನುವ ಪರಿಕಲ್ಪನೆಯೂ ಭೌತಿಕವಾದುದಕ್ಕಿಂತ ಬೌದ್ಧಿಕವಾದ ವ್ಯಕ್ತಿಯ ದೇಹದ ಪರಿಕಲ್ಪನೆಗೆ ಸ್ಥಳಾಂತರವಾಯಿತು. ದೇವರು ಮತ್ತು ದೇವಾಲಯ ಎನ್ನುವುದು ವ್ಯಕ್ತಿಯಿಂದ ಹೊರತಾದುದಲ್ಲ ಅದು ವ್ಯಕ್ತಿಯ ಒಳಗಿನದು ಎಂಬ ಅರಿವಿಗೆ ವಚನಕಾರರು ಬಂದರು.

ಕಟ್ಟಿದ ಲಿಂಗವ ಬಿಟ್ಟು, ಬೆಟ್ಟದ ಲಿಂಗಕ್ಕೆ ಹೋಗಿ
ಹೊಟ್ಟೆಯಡಿಯಾಗಿ ಬೀಳುವ, ಲೊಟ್ಟೆ ಮೂಗನ ಕಂಡರೆ
ಮೆಟ್ಟಿದ್ದ ಎಡಪಾದರಕ್ಷೆಯ ತಕ್ಕೊಂಡು
ಲಟಲಟನೆ ಹೊಡೆ ಒಂದ ಅಂಬಿಗರ ಚೌಡಯ್ಯ

ಮತ್ತು

ಹತ್ತು ಮತ್ತರದ ಭೂಮಿ, ಬತ್ತದ ಹಯನು
ನಂದಾದೀವಿಗೆಯ ಮಾಡಿದೆವೆಂಬರ
ಮುಖವ ನೋಡಲಾಗದು,
ಅವರ ನುಡಿಯ ಕೇಳಲಾಗದು

ಎಂಬ ವಚನವೂ ದೇವಸ್ಥಾನಕ್ಕೆ ಹೋಗುವವರನ್ನು ಕುರಿತ ನಿಲುವಾಗಿದೆ. ಎರಡನೇಯ ವಚನವೂ ದೇವರು ಮತ್ತು ಧರ್ಮದ ಹೆಸರಿನಲ್ಲಿ ದಾನದತ್ತಿಗಳನ್ನು ಬೇಡುವ ಪುರೋಹಿತ, ಶ್ರೀಮಂತ ಮತ್ತು ಮೇಲ್ಜಾತಿಯವರನ್ನು ಕುರಿತ ಪ್ರತಿಭಟನಾತ್ಮಕ ಧೋರಣೆಯಾಗಿದೆ. ವಚನಕಾರರು ದೇವರು-ಧರ್ಮದ ವಿಚಾರದಲ್ಲಿ ಇಹ-ಪರಗಳ ನಡುವೆ ಸಮನ್ವಯ ಮತ್ತು ಸಹ ಸಂಬಂಧ ಕಲ್ಪಿಸಲು ಯತ್ನಿಸಿದರು. ಆದರೆ ವಚನಕಾರರು ಎಂದೂ ಪರದ ನಿರಾಕರಣೆಯನ್ನು ಮಾಡಲಿಲ್ಲ. ಬದಲಾಗಿ ಇಹವನ್ನೇ ಅರ್ಥೈಸುವ ಮತ್ತು ಚಿಂತಿಸುವ ಕೆಲಸ ಮಾಡಿದರು.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವವರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ

ಎಂಬ ವಚನವೂ ಇಹ-ಪರಗಳ ವೈಜ್ಞಾನಿಕ ಮತ್ತು ವೈಚಾರಿಕ ನಿಲುವಿಗೆ ಸಾಕ್ಷಿಭೂತವಾಗಿ ನಿಲ್ಲುತ್ತದೆ. ಮೇಲ್ಕಂಡ ಈ ವಚನವೂ ಬದುಕಿನ ಅಗತ್ಯ, ಅನಿವಾರ್ಯತೆ ಮತ್ತು ಜೀವ-ಜೀವನಕ್ಕೆ ಇರುವ ಮೌಲ್ಯವನ್ನು ಪ್ರತಿಪಾದಿಸುತ್ತದೆ.

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದ ಬಯಸುವವರು
ವೀರರೂ ಅಲ್ಲ, ಧೀರರೂ ಅಲ್ಲ

ಎಂಬ ವಚನವೂ ಇಹದ ಸ್ಥಿತಿ. ಇಲ್ಲಿಯೇ ಇರುವಲ್ಲಿಯೇ ಸಾರ್ಥಕತೆಯನ್ನು ಕಾಣಬೇಕು. ಸುಖ-ದು:ಖ ಮತ್ತು ಪಾಪ-ಪುಣ್ಯಗಳು ಬದುಕಿನ ಒಂದೇ ನಾಣ್ಯದ ಮುಖಗಳು. ಇವುಗಳನ್ನು ಇದ್ದಂತೆಯೇ ಸ್ವೀಕರಿಸಬೇಕು.

ಸುಖ ಬಂದರೆ ಪುಣ್ಯದ ಫಲ ಎನ್ನೆನು:
ದು:ಖ ಬಂದರೆ ಪಾಪದ ಫಲ ಎನ್ನೆನು,
ನೀ ಮಾಡಿದೊಡೆ ಆಯಿತ್ತು ಎನ್ನೆನು,
ಸಂಸಾರವ ಸವೆಯೆ ಬಳಸುವೆನು

ಎಂಬ ವಚನವೂ ಭಾರತೀಯ ಧಾರ್ಮಿಕ ಮತ್ತು ಸಾಮಾಜಿಕ ತತ್ವಶಾಸ್ತ್ರದ ಇತಿಹಾಸದಲ್ಲಿ ಮುಖ್ಯವಾಗಿ ನಿಲ್ಲುತ್ತದೆ. ಹಿಂದೂ ಧರ್ಮದ ಧಾರ್ಮಿಕ ನಂಬಿಕೆಯಲ್ಲಿ ಸ್ವರ್ಗ-ನರಕ, ಪಾಪ-ಪುಣ್ಯ, ಕಾಮಧೇನು-ಕಲ್ಪವೃಕ್ಷ, ಗಂಧರ್ವ-ಅಪ್ಸರ ಸ್ತ್ರೀಯರು ಮುಂತಾದ ಪರಂಪರಾಗತ ನಂಬಿಕೆಯನ್ನೇ ಬುಡ ಮೇಲು ಮಾಡಿ ಇವುಗಳ ಪರಿಕಲ್ಪಯನ್ನೇ ಪುನರ್ ವ್ಯಾಖ್ಯಾನಿಸಿದರು. ಅಯ್ಯ ಎಂದರೆ ಸ್ವರ್ಗ, ಎಲವೂ ಎಂದರೆ ನರಕ ಎಂಬ ವಚನವೂ ಇಹ-ಪರಗಳ ಪುನರ್ ವ್ಯಾಖ್ಯಾನವಾಗಿದೆ. ನೋಡಿದ್ದನ್ನು ಕಲ್ಪಿಸಿಕೊಳ್ಳುವ ಅವಾಸ್ತವಿಕ ನಿಲುವಿಗಿಂತ ವಾಸ್ತವದ ನಮ್ಮ ಇರುವಿಕೆಯನ್ನು ಶ್ರೇಷ್ಠ ಎಂದು ನಂಬಿದವರು. ಸ್ವರ್ಗ ಮತ್ತು ನರಕ ಎಂಬುವುದು ನಮಗೆ ನಾವೇ ನಮ್ಮ-ನಮ್ಮ ಬದುಕಿನ ನಡವಳಿಕೆಯಿಂದ ನಿರ್ಮಿಸಿಕೊಳ್ಳಬಹುದಾದ ವಾಸ್ತವಿಕ ನೆಲೆಗಳೇ ಹೊರತು ಬೇರೆಯಲ್ಲ. ದೇವಸ್ಥಾನಗಳ ನಿರ್ಮಾಣ ಮತ್ತು ಕೇವಲ ದೇವರಿಗೆ-ದೇವಾಲಯಕ್ಕೆ ನೀಡುವ ದಾನಗಳಿಂದ ಎಂದೂ ಸ್ವರ್ಗ ಪ್ರಾಪ್ತಿಯಾಗಲಾರದು. ಬದಲಾಗಿ ಸಮಾನತೆ, ಸಮನ್ವಯ, ಸಹಕಾರ ಮತ್ತು ಹೊಂದಾಣಿಕೆಯಿಂದ ಪ್ರಾಪ್ತಿಯಾಗುತ್ತದೆ ಎಂದು ಜನ-ಮನದಲ್ಲಿನ ಚಿಂತನೆಯನ್ನೇ ಮಾರ್ಪಾಡಿಸಲು ಯತ್ನಿಸಿದರು. ಇದಕ್ಕೆ ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರೂ ಒಂದೇ ಎಂಬ

ಬಸವಣ್ಣನವರ ವಚನವೇ ಇದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. 'ಹೊಲೆತನ' ಎಂಬ ಪರಿಕಲ್ಪನೆಯ ಪ್ರಶ್ನೆಯನ್ನೇ ಪುನರ್ ವ್ಯಾಖ್ಯಾನಿಸಿ ವಚನಕಾರರು ಮನೋಭಾವದ ಮತ್ತು ಮಾನಸಿಕ ನೆಲೆಯ ಹಿನ್ನಲೆಯ ನಡವಳಿಕೆಯಿಂದ ಹೊಲೆಯನಾಗುತ್ತಾನೆಯೇ ಹೊರತು ಹುಟ್ಟಿನಿಂದಲ್ಲ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಉದಾರತೆ ಹಾಗೂ ಉದಾತ್ತ ನಡವಳಿಕೆಯುಳ್ಳವನೇ ನಿಜವಾದ ಕುಲಜ ಎಂಬ ವ್ಯಾಖ್ಯಾನವೂ ಪರಂಪರಾಗತ ಜಾತಿಯ ಕಲ್ಪನೆಯನ್ನು ಹೊಡೆದು ಹಾಕಿಲು ಯತ್ನಿಸಿತು. ಜಾತಿಯ ವ್ಯಾಖ್ಯಾನವನ್ನು ಪುನರ್ ಕಲ್ಪಿಸುವಾಗ 'ಕಾಯಕ'ದ ಪರಿಕಲ್ಪನೆಯನ್ನು ಬದಲಾಯಿಸಿದ್ದು ವಚನಕಾರರ ಹೆಗ್ಗಳಿಕೆ. ಕಾಯಕ ಎಂಬುದು ದೈಹಿಕ ಶ್ರಮ-ದುಡಿಮೆ ಎಂಬ ಸಾಮಾನ್ಯ ಅರ್ಥವನ್ನು ಕಲ್ಪಿಸಿ, ವೃತ್ತಿ ತಾರತಮ್ಯವನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಹೀಗಾಗಿ ವೈಚಾರಿಕತೆಯಿಂದ ಸಿದ್ಧವಾದ ಸಂಸ್ಕೃತಿಯನ್ನು ಪುನರ್ ವ್ಯಾಖ್ಯಾನಿಸುವ ಕೆಲಸವನ್ನು ಎಲ್ಲಾ ವಚನಕಾರರು ಮಾಡಿದರು.

